

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1417 (1735) |
| 2) | ಮಾನ್ಯ ಸದಸ್ಯರ ಹೆಸರು | ಡಾ.ಚಂದ್ರಶೇಖರ್ ಬಿ. ಪಾಟೀಲ್ (ಪದವೀಧರರ ಕ್ಷೇತ್ರದಿಂದ) |
| 3) | ಉತ್ತರಿಸಬೇಕಾದ ದಿನಾಂಕ | 14-03-2022 |
| 4) | ಉತ್ತರಿಸುವವರು | ಮಾನ್ಯ ಉನ್ನತ ಶಿಕ್ಷಣ, ವಿದ್ಯುನ್ಮಾನ, ಐಟಿ-ಬಿಟಿ ಮತ್ತು ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು. |

<table>
<tr><th>ಪ್ರಶ್ನೆ</th><th>ಉತ್ತರ</th></tr>
<tr><td>(ಅ) ಕಲ್ಯಾಣ ಕರ್ನಾಟಕ ಭಾಗದಲ್ಲಿ ಕಳೆದ 2 ವರ್ಷಗಳಿಂದ ಕರ್ನಾಟಕ ಕೌಶಲ್ಯ ಅಭಿವೃದ್ಧಿ ನಿಗಮ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆಯ ಅಡಿಯಲ್ಲಿ ಎಷ್ಟು ಬಾರಿ ಉದ್ಯೋಗ ಮೇಳ ಆಯೋಜಿಸಲಾಗಿದೆ; (ವಿವರ ನೀಡುವುದು)</td><td>ಕರ್ನಾಟಕ ಕೌಶಲ್ಯಾಭಿವೃದ್ಧಿ ನಿಗಮ:<br>ಕಳೆದ 2 ವರ್ಷಗಳಲ್ಲಿ ಕಲ್ಯಾಣ ಕರ್ನಾಟಕ ಭಾಗದಲ್ಲಿ ಕೌಶಲ್ಯ ಅಭಿವೃದ್ಧಿ ನಿಗಮದಿಂದ ನಡೆದ ಉದ್ಯೋಗ ಮೇಳಗಳ ವಿವರ ಈ ಕೆಳಕಂಡಂತಿದೆ.<br><table><tr><th>ವರ್ಷವಾರು</th><th>ಉದ್ಯೋಗ ಮೇಳಗಳ ಸಂಖ್ಯೆ</th><th>ಉದ್ಯೋಗ ಪಡೆದವರ ವಿವರ</th></tr><tr><td>2020-21</td><td>10</td><td>1697</td></tr><tr><td>2021-22</td><td>04</td><td>2389</td></tr></table><br><u>ರಾಷ್ಟ್ರೀಯ ಗ್ರಾಮೀಣ ಜೀವನೋಪಾಯ ಅಭಿಯಾನ</u> (NRLM):<br>ಸಂಜೀವಿನಿ- ಕೆಎಸ್‌ಆರ್‌ಎಲ್‌ಪಿಎಸ್ ರಡಿ ಕಲ್ಯಾಣ ಕರ್ನಾಟಕ ಭಾಗದಲ್ಲಿ ಕಳೆದ 2 ವರ್ಷಗಳಿಂದ ಡಿಡಿಯುಜಿಕೆವೈ ಮುಖೇನ ತರಬೇತಿ, ಉದ್ಯೋಗ ಮೇಳ ಮತ್ತು ಉದ್ಯೋಗ ಪಡೆದವರ ವಿವರಗಳನ್ನು ಅನುಬಂಧ-1 ರಲ್ಲಿ ಒದಗಿಸಿದೆ.</td></tr>
<tr><td>(ಆ) ಉದ್ಯೋಗ ಮೇಳದಲ್ಲಿ ಎಷ್ಟು ಜನರಿಗೆ ಉದ್ಯೋಗ ದೊರಕಿದೆ; (ವಿವರ ನೀಡುವುದು)</td><td>ಕರ್ನಾಟಕ ಕೌಶಲ್ಯಾಭಿವೃದ್ಧಿ ನಿಗಮ:<br>ಕೌಶಲ್ಯ ಅಭಿವೃದ್ಧಿ ನಿಗಮದಿಂದ ನಡೆದ ಉದ್ಯೋಗ ಮೇಳಗಳಲ್ಲಿ ಉದ್ಯೋಗ ಪಡೆದವರ ವಿವರ ಈ ಕೆಳಕಂಡಂತಿದೆ.<br><table><tr><th>ವರ್ಷವಾರು</th><th>ಉದ್ಯೋಗ ಮೇಳಗಳ ಸಂಖ್ಯೆ</th><th>ಉದ್ಯೋಗ ಪಡೆದವರ ವಿವರ</th></tr><tr><td>2020-21</td><td>10</td><td>1697</td></tr><tr><td>2021-22</td><td>04</td><td>2389</td></tr></table><br><u>ರಾಷ್ಟ್ರೀಯ ಗ್ರಾಮೀಣ ಜೀವನೋಪಾಯ ಅಭಿಯಾನ</u> (NRLM):<br>ಸಂಜೀವಿನಿ- ಕೆಎಸ್‌ಆರ್‌ಎಲ್‌ಪಿಎಸ್ ರಡಿ ಕಲ್ಯಾಣ ಕರ್ನಾಟಕ ಭಾಗದಲ್ಲಿ ಕಳೆದ 2 ವರ್ಷಗಳಿಂದ ಡಿಡಿಯುಜಿಕೆವೈ ಯೋಜನೆಯಡಿ 660 ಅಭ್ಯರ್ಥಿಗಳಿಗೆ ಉದ್ಯೋಗ ದೊರಕಿದೆ.</td></tr>
<tr><td>(ಇ) ನಿರುದ್ಯೋಗಿಗಳಿಗೆ ಉದ್ಯೋಗ ಕಲ್ಪಿಸಲು ಸರ್ಕಾರ ಕೈಗೊಂಡ ಕ್ರಮವೇನು?</td><td><u>ಕರ್ನಾಟಕ ಕೌಶಲ್ಯಾಭಿವೃದ್ಧಿ ನಿಗಮ:</u><br>ಕರ್ನಾಟಕ ಕೌಶಲ್ಯಾಭಿವೃದ್ಧಿ ನಿಗಮವು ಹಲವಾರು ಕೈಗಾರಿಕಾ ಸಂಸ್ಥೆ/ಸಂಘಗಳೊಂದಿಗೆ (ಉದಾ:ELCIA/Flipkart-Instakart/Mysore Industrial Association, ESDM Cluster, Mysore & ಇತರೆ)</td></tr>
</table>

ಒಡಂಬಡಿಕೆಯನ್ನು ಮಾಡಿಕೊಂಡಿದ್ದು, ತರಬೇತುದಾರ ಸಂಸ್ಥೆಗಳೊಂದಿಗೆ ಹೆಚ್ಚಿನ ಕೌಶಲ್ಯಾಧಾರಿತ ತರಬೇತಿಯೊಂದಿಗೆ ಉದ್ಯೋಗ ದೊರಕಿಸುವ ಕ್ರಮವನ್ನು ಕೈಗೊಳ್ಳಲಾಗಿದೆ. ತರಬೇತಿ ಪಡೆದ ಅಭ್ಯರ್ಥಿಗಳು ಹಾಗೂ ಕೈಗಾರಿಕೋದ್ಯಮಿಗಳನ್ನು ಒಂದೆಡೆ ಸೇರಿಸಿ, ಉದ್ಯೋಗ ದೊರಕಿಸಿ ಕೊಡುವ ನಿಟ್ಟಿನಲ್ಲಿ skillconnect portal ಅನ್ನು ಅಭಿವೃದ್ಧಿಪಡಿಸಿ, ಉದ್ಯೋಗ ಕಲ್ಪಿಸಿಕೊಡುವ ನಿಟ್ಟಿನಲ್ಲಿ ಕಾರ್ಯೋನ್ಮುಖವಾಗಿರುತ್ತದೆ.

**ದೀನ್ ದಯಾಳ್ ಅಂತ್ಯೋದಯ ರಾಷ್ಟ್ರೀಯ ನಗರ ಜೀವನೋಪಾಯ ಅಭಿಯಾನ (ಡೇ-ನಲ್ಮ್):**

ಡೇ-ಎನ್‌ಯುಎಲ್‌ಎಂ ಅಭಿಯಾನದಡಿ ನಿರುದ್ಯೋಗಿಗಳಿಗೆ ಉದ್ಯೋಗ ಕಲ್ಪಿಸಲು ಈ ಕೆಳಕಂಡಂತೆ ಅವಕಾಶವಿರುತ್ತದೆ.

**1)ಸ್ವಯಂ ಉದ್ಯೋಗ ಕಾರ್ಯಕ್ರಮ:**

ಸದರಿ ಉಪಘಟಕದಡಿ ವೈಯಕ್ತಿಕ ಕಿರು ಉದ್ದಿಮೆ, ಗುಂಪು ಕಿರು ಉದ್ದಿಮೆ ಹಾಗೂ ಎಸ್‌ಹೆಚ್‌ಜಿ ಬ್ಯಾಂಕ್ ಕ್ರೆಡಿಟ್ ಲಿಂಕೇಜ್‌ಗೆ ಸಂಬಂಧಿಸಿದಂತೆ ಕ್ರಮವಾಗಿ ಬ್ಯಾಂಕಿನಿಂದ ರೂ.2.00, ರೂ.10.00 ಲಕ್ಷ ಮತ್ತು ರೂ.1.00 ಲಕ್ಷವರೆಗೆ ಬ್ಯಾಂಕಿನಿಂದ ಸಾಲ ಸೌಲಭ್ಯವನ್ನು ಕಲ್ಪಿಸಲಾಗುವುದು. ಶೇ.7 ಕ್ಕಿಂತ ಮೇಲ್ಪಟ್ಟ ಬಡ್ಡಿ ಸಹಾಯಧನವನ್ನು ಯೋಜನೆಯಿಂದ ಭರಿಸಿ ಪಾವತಿಸಲಾಗುವುದು ಹಾಗೂ ಸ್ವ-ಸಹಾಯ ಸಂಘಗಳು ನಿಯಮಿತವಾಗಿ ಸಾಲವನ್ನು ಮರು ಪಾವತಿಸಿದರೆ ಶೇ.3 ರಷ್ಟು ಹೆಚ್ಚುವರಿ ಬಡ್ಡಿ ಸಹಾಯಧನ ನೀಡಲಾಗುವುದು ಹಾಗೂ ಉದ್ಯಮಶೀಲತಾ ತರಬೇತಿಯನ್ನು ನೀಡಲಾಗುವುದು.

**2) ಕೌಶಲ್ಯ ತರಬೇತಿ ಮೂಲಕ ಉದ್ಯೋಗ ಮತ್ತು ಸ್ಥಳ ನಿಯುಕ್ತಿ:**

ಸದರಿ ಉಪಘಟಕದಡಿ ನಗರದ ನಿರುದ್ಯೋಗ ಯುವಕ/ಯುವತಿಯರಿಗೆ ವಿವಿಧ ಉದ್ಯೋಗಾಧಾರಿತ ಕೌಶಲ್ಯಾಭಿವೃದ್ಧಿ ತರಬೇತಿ ಕಾರ್ಯಕ್ರಮಗಳನ್ನು ನೀಡಿ, ಪ್ರಮಾಣೀಕರಣ ಮತ್ತು ಮೌಲ್ಯಮಾಪನವನ್ನು ಕೈಗೊಂಡು, ಕೇಂದ್ರ ಸರ್ಕಾರದ ಪ್ರಮಾಣ ಪತ್ರವನ್ನು ನೀಡಿ, ತರಬೇತಿಯನ್ನು ಪಡೆದುಕೊಂಡ ಶೇ.70 ರಷ್ಟು ಅಭ್ಯರ್ಥಿಗಳಿಗೆ ಸ್ವಯಂ ಉದ್ಯೋಗ ಅಥವಾ ವೇತನಾಧಾರಿತ ಉದ್ಯೋಗವನ್ನು ಕಲ್ಪಿಸಲಾಗುವುದು.

3) ಪ್ರಧಾನ ಮಂತ್ರಿ ಆತ್ಮ ನಿರ್ಭರ್ ನಿಧಿ ಯೋಜನೆಯಡಿ ಬೀದಿ ವ್ಯಾಪಾರಿಗಳಿಗೆ ರೂ.10,000/- ಗಳಿಂದ ರೂ.20,000/- ಗಳವರೆಗೆ ಕಿರು ಸಾಲ ಸೌಲಭ್ಯ ಪಡೆಯಲು ಅವಕಾಶವಿರುತ್ತದೆ.

**ರಾಷ್ಟ್ರೀಯ ಗ್ರಾಮೀಣ ಜೀವನೋಪಾಯ ಅಭಿಯಾನ (NRLM):**

ಸಂಜೀವಿನಿ-ಕೆಎಸ್‌ಆರ್‌ಎಲ್‌ಪಿಎಸ್ ಸಂಸ್ಥೆಯಡಿ ನಿರುದ್ಯೋಗಿಗಳಿಗೆ ಉದ್ಯೋಗ ಕಲ್ಪಿಸಲು ಈ ಕೆಳಕಂಡಂತೆ ವಿವರ ನೀಡಲಾಗಿದೆ.

1. **ದೀನ ದಯಾಳ ಉಪಾಧ್ಯಾಯ ಗ್ರಾಮೀಣ ಕೌಶಲ್ಯ ಯೋಜನೆಯ-ಡಿಡಿಯುಜಿಕೆವೈ:**

ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು(60:40) ರಾಜ್ಯದಲ್ಲಿ 2013-14ನೇ ಸಾಲಿನಿಂದ ಜಾರಿಗೊಳಿಸಲಾಗುತ್ತಿದೆ. ಈ ಯೋಜನೆಯಡಿ 18 ರಿಂದ 35 ವಯೋಮಾನದ ಗ್ರಾಮೀಣ ಯುವಕ ಯುವತಿಯರನ್ನು ಗುರುತಿಸಿ ಅವರುಗಳ ವಿದ್ಯಾರ್ಹತೆಗನುಗುಣವಾಗಿ (8ನೇ ತರಗತಿ ಮೇಲ್ಪಟ್ಟು) ಕಂಪ್ಯೂಟರ್, ಹಾಸ್ಪಿಟಾಲಿಟಿ, ಡಾಟಾಎಂಟ್ರಿ, ಪ್ರವಾಸೋದ್ಯಮ, ಮೆಕಾನಿಕ್, ನರ್ಸಿಂಗ್, ಸೆಕ್ಯೂರಿಟಿ ಸರ್ವಿಸಸ್, ಟೈಲರಿಂಗ್ ಇತ್ಯಾದಿಯಾಗಿ ವಿವಿಧ ಕ್ಷೇತ್ರಗಳಲ್ಲಿ ಕನಿಷ್ಠ 3 ತಿಂಗಳುಗಳಿಂದ ಒಂದು ವರ್ಷದವರೆಗೆ ಉಚಿತ

| | |
|---|---|
| | ವಸತಿಯೊಂದಿಗಿನ ಶ್ರೇಷ್ಠ ಗುಣಮಟ್ಟದ ಕೌಶಲ್ಯ ತರಬೇತಿ ನೀಡಿ ಕಡ್ಡಾಯವಾಗಿ ಉದ್ಯೋಗ ಒದಗಿಸುವ ಏಕೈಕ ಯೋಜನೆಯಾಗಿದೆ.<br><br>ಈ ಕೆಳಗಿನ ಮಾನದಂಡಗಳನ್ನು ಹೊಂದಿರಬೇಕು.<br>• ಗ್ರಾಮೀಣ ಪ್ರದೇಶದ ಯುವಕ/ಯುವತಿಯರಾಗಿರಬೇಕು<br>• 18 ರಿಂದ 35 ವಯೋಮಾನದವರಾಗಿರಬೇಕು,<br>• ಕನಿಷ್ಠ 10ನೇ ತರಗತಿಯವರೆಗೆ ಉತ್ತೀರ್ಣ / ಅನುತ್ತೀರ್ಣ ಓದಿರಬೇಕು.<br>• ಬಿ.ಪಿ.ಎಲ್ ಕಾರ್ಡ್ ಹೊಂದಿರಬೇಕು.<br>2. **ಗ್ರಾಮೀಣ ಸ್ವಯಂ ಉದ್ಯೋಗ ತರಬೇತಿ ಸಂಸ್ಥೆ:** ಸದರಿ ತರಬೇತಿಯ ಸಂಸ್ಥೆಯ ಮೂಲಕ ಗ್ರಾಮೀಣ ನಿರುದ್ಯೋಗ ಯುವಕ/ಯುವತಿಯರಿಗೆ ಸ್ವಯಂ ಉದ್ಯೋಗ ಕೈಗೊಳ್ಳಲು ತರಬೇತಿಯನ್ನು ನೀಡಲಾಗುತ್ತಿದೆ. ಸದರಿ ತರಬೇತಿಯಲ್ಲಿ ಸ್ವ-ಉದ್ಯೋಗ ಕೈಗೊಳ್ಳಬೇಕಾಗಿರುವ ಅಗತ್ಯ ಮಾಹಿತಿ, ಯೋಜನಾ ವರದಿ, ಮಾರ್ಕೆಟ್ ಆಯ್ಕೆ ಸಂಬಂದಿಸಿದಂತೆ ತರಬೇತಿಯನ್ನು ನೀಡಲಾಗುತ್ತಿದೆ. ತರಬೇತಿಯ ಸಂದರ್ಭದಲ್ಲಿ ಶೀಭಿರಾರ್ಥಿಗಳಿಗೆ ಸಮವಸ್ತ್ರ ನೀಡಲಾಗುತ್ತದೆ.<br><br>ಈ ಕೇಳಗಿನ ಮಾನದಂಡಗಳನ್ನು ಹೊಂದಿರಬೇಕು,<br>• ಗ್ರಾಮೀಣ ಪ್ರದೇಶದ ಯುವಕ/ಯುವತಿಯರಾಗಿರಬೇಕು,<br>• 18 ರಿಂದ 45 ವಯೋಮಾನದವರಾಗಿರಬೇಕು,<br>• ಕನಿಷ್ಠ 7ನೇ ತರಗತಿವರಿಗೆ ಓದಿರಬೇಕು,<br>• ಆಧಾರ ಕಾರ್ಡ್ ಮತ್ತು ಬಿ.ಪಿ.ಎಲ್ ಕಾರ್ಡ್ ಹೊಂದಿರಬೇಕು.<br><br>**ಸರ್ಕಾರ ಕೈಗೊಂಡ ಕ್ರಮಗಳು:**<br>• ಪ್ರತಿ ಜಿಲ್ಲೆಯಲ್ಲಿ ಜಿಲ್ಲಾ ಪಂಚಾಯತ್ ಮೂಲಕ ಉದ್ಯೋಗ ಮೇಳಗಳನ್ನು ಹಮ್ಮಿಕೊಳ್ಳಲು ಕ್ರಮವಹಿಸಲಾಗಿದೆ.<br>• ಈ ಮಾಹಿತಿಗಳನ್ನು ಅರ್ಹ ಫಲಾನುಭವಿಗಳಿಗೆ ತಲುಪಿಸಲು ಟಿ.ವಿ ದೂರದರ್ಶನ ಸೇರಿ ವಿವಿಧ ಸಮೂಹ ಮಾಧ್ಯಮಗಳ ಮೂಲಕ ಪ್ರಚಾರ ಕೈಗೊಳ್ಳಲಾಗುತ್ತಿದೆ.<br>• ಉದ್ಯೋಗ ನೀಡುವ ಖಾಸಗಿ ಸಂಸ್ಥೆಗಳಿಂದ ನಿರಂತರ ಅನುಸರಣೆ ಮಾಡಿ ಉದ್ಯೋಗ ಮೇಳದಲ್ಲಿ ನೋಂದಾಯಿಸಿ ಉದ್ಯೋಗ ಒದಗಿಸಲು ಕ್ರಮವಹಿಸಲಾಗಿದೆ. |

**ಸಂಖ್ಯೆ: ಕೌಉಜೀಇ 9 ಕೌಗುಪ್ರ 2022**

(ಡಾ॥ ಸಿ.ಎನ್. ಅಶ್ವಥ್‌ನಾರಾಯಣ)
ಉನ್ನತ ಶಿಕ್ಷಣ, ವಿದ್ಯುನ್ಮಾನ, ಐಟಿ-ಬಿಟಿ ಮತ್ತು
ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ
ಮತ್ತು ಜೀವನೋಪಾಯ ಇಲಾಖಾ ಸಚಿವರು.

## ಅನುಬಂದ-1

(ಚುಕ್ಕೆರಹಿತ ಪ್ರಶ್ನೆ ಸಂಖ್ಯೆ 1417(1735) ರ ಲಗತ್ತು)

ಸಂಜೀವಿನಿ- ಕೆಎಸ್‌ಆರ್‌ಎಲ್‌ಪಿಎಸ್ ರಡಿ ಕಲ್ಯಾಣ ಕರ್ನಾಟಕ ಭಾಗದಲ್ಲಿ ಕಳೆದ 2 ವರ್ಷಗಳಿಂದ ಡಿಡಿಯುಜಿಕೆವೈ ಮುಖೇನ ತರಬೇತಿ, ಉದ್ಯೋಗ ಮೇಳ ಮತ್ತು ಉದ್ಯೋಗ ಪಡೆದವರ ವಿವರಗಳ

| ಕ್ರ.ಸಂ | ಜಿಲ್ಲೆಗಳ ಹೆಸರು | 2020-21* | 2021-22 | ಉದ್ಯೋಗ ಮೇಳಗಳಲ್ಲಿ ನೋಂದಾಯಿಸಿದವರು | ಸಂದರ್ಶನದಲ್ಲಿ ಭಾಗವಹಿಸಿದ ಅಭ್ಯರ್ಥಿಗಳ ಸಂಖ್ಯೆ | ತಾತ್ಕಾಲಿಕ ಆಯ್ಕೆಯಾಗಿರುವ ಅಭ್ಯರ್ಥಿಗಳ ಸಂಖ್ಯೆ | ಉದ್ಯೋಗ ಪಡೆದ ಅಭ್ಯರ್ಥಿಗಳ ಸಂಖ್ಯೆ | ಭಾಗವಹಿಸಿದ ಸಂಸ್ಥೆಗಳು |
|---|---|---|---|---|---|---|---|---|
| | | ಉದ್ಯೋಗ ಮೇಳಗಳ ಸಂಖ್ಯೆ | ಉದ್ಯೋಗ ಮೇಳಗಳ ಸಂಖ್ಯೆ | | | | | |
| 1 | ಬಳ್ಳಾರಿ | 0 | 1 | 2589 | 2316 | 602 | 545 | 22 |
| 2 | ಬೀದರ್ | 0 | 0 | 0 | 0 | 0 | 0 | 0 |
| 3 | ಕಲಬುರಗಿ | 0 | 1 | 1410 | 1249 | 280 | 115 | 19 |
| 4 | ಕೊಪ್ಪಳ | 0 | 0 | 0 | 0 | 0 | 0 | 0 |
| 5 | ರಾಯಚೂರು | 0 | 0 | 0 | 0 | 0 | 0 | 0 |
| 6 | ಯಾದಗಿರಿ | 0 | 0 | 0 | 0 | 0 | 0 | 0 |
| | | **0** | **2** | **3999** | **3565** | **882** | **660** | **41** |

*2020-21 ರಲ್ಲಿ ಕೋವಿಡ್ -19 ಸಾಂಕ್ರಮಿಕ ನಿಮಿತ್ತ ಉದ್ಯೋಗ ಮೇಳ ಕೈಗೊಂಡಿರುವುದಿಲ್ಲ.